# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1562 |
| 2 | ಸದಸ್ಯರ ಹೆಸರು | ಶ್ರೀ ಎಸ್.ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3 | ಉತ್ತರಿಸಬೇಕಾದ ದಿನಾಂಕ | 18.03.2020 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರವು 2009ನೇ ಸಾಲಿನಲ್ಲಿ ನಮೂನೆ 1 ರಿಂದ 5 ಮತ್ತು ನಮೂನೆ 6 ರಿಂದ 10 ತಯಾರಿಸಿ ದರಖಾಸ್ತು ಪೋಡಿ ಕೆಲಸ ನಿರ್ವಹಿಸಲು ಮಾರ್ಗ ಸೂಚಿಗಳನ್ನು ಹೊರಡಿಸಿದ್ದು ಈವರೆವಿಗೂ ಶೇ.20 ರಷ್ಟು ರಾಮನಗರ ಜಿಲ್ಲಾ ವ್ಯಾಪ್ತಿಯಲ್ಲಿ ದರಖಾಸ್ತು ಪೋಡಿ ಯಾಗಿಲ್ಲದಿರುವುದಕ್ಕೆ ಕಾರಣ ಗಳೇನು; (ವಿವರ ನೀಡುವುದು) | ರಾಮನಗರ ಜಿಲ್ಲಾ ವ್ಯಾಪ್ತಿಯಲ್ಲಿ ಸಾರ್ವಜನಿಕರಿಂದ ಸ್ವೀಕರಿಸಲಾಗುತ್ತಿದ್ದ ಹದ್ದುಬಸ್ತು, ಈ-ಸ್ವತ್ತು ಮತ್ತು ಇತರೆ ಪೋಡಿ ಪ್ರಕರಣಗಳಲ್ಲಿ ಅಳತೆ ಕಾರ್ಯ ನಿರ್ವಹಿಸಲು ಸರ್ಕಾರಿ ಭೂಮಾಪಕರ ಕೊರತೆ ಇದ್ದುದರಿಂದ ಮತ್ತು ಜಿಲ್ಲಾ ವ್ಯಾಪ್ತಿಯಲ್ಲಿ ಶ್ರೀರಂಗ ಏತ ನೀರಾವರಿಯ ಭೂಸ್ವಾಧೀನ, ಇಗ್ಗಲೂರು ಬ್ಯಾರೇಜ್ ಪೈಪ್‌ಲೈನ್ ಯೋಜನೆಯ ಭೂಸ್ವಾಧೀನ, ಮಾಗಡಿ-ಸೋಮವಾರಪೇಟೆ ಕೆ-ಶಿಫ್ ರಸ್ತೆ ಅಭಿವೃದ್ಧಿ ಯೋಜನೆ, ರಾಷ್ಟ್ರೀಯ ಹೆದ್ದಾರಿ 209 ಮತ್ತು 257 ಭೂಸ್ವಾಧೀನ ಕುರಿತು ಅಳತೆ ಹಾಗೂ ಅರಣ್ಯ ಭೂಮಿಯನ್ನು ಅಧಿಸೂಚನೆಯಿಂದ ಕೈಬಿಡುವ ಸಂಬಂಧ ಪ್ರಸ್ತಾವನೆ ಸಲ್ಲಿಸಲು ಸರ್ವೆ ಮಾಡಿ ನಕ್ಷೆ ತಯಾರಿಸುವ ಕೆಲಸ, ಎಫ್.ಆರ್.ಎ-ಅನುಸೂಚಿತ ಬುಡಕಟ್ಟು ಜನಾಂಗದವರಿಗೆ ಅರಣ್ಯ ಪ್ರದೇಶದಲ್ಲಿ ಹಕ್ಕು ಕೊಡುವ ಸಂಬಂಧ ಅಳತೆ ಮಾಡಿ ನಕ್ಷೆ ತಯಾರಿಸುವ ಕೆಲಸಕ್ಕೆ ಲಭ್ಯ ಭೂಮಾಪಕರನ್ನು ನಿಯೋಜಿಸಲಾಗಿದ್ದರಿಂದ ದರಖಾಸ್ತು ಪೋಡಿ ಆಂದೋಲನವನ್ನು ಹಮ್ಮಿಕೊಳ್ಳಲು ಸಾಧ್ಯವಾಗಿರುವುದಿಲ್ಲ.<br>ಪ್ರಸ್ತುತ ಜಿಲ್ಲೆಯ ಭೂಮಾಪಕರ ಎಲ್ಲಾ ಹುದ್ದೆಗಳು ಭರ್ತಿ ಮಾಡಲಾಗಿದೆ ಮತ್ತು ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ 20 ಗ್ರಾಮಗಳನ್ನು ದರಖಾಸ್ತು ಪೋಡಿ ಆಂದೋಲನಕ್ಕೆ ಆಯ್ಕೆ ಮಾಡಿಕೊಂಡು ನಮೂನೆ 1 ರಿಂದ 5ನ್ನು ಭರ್ತಿ ಮಾಡಲಾಗಿದ್ದು, ಪ್ರಸ್ತುತ ನಮೂನೆ 6 ರಿಂದ 10ನ್ನು ತಯಾರಿಸಿ ಪೋಡಿ ದುರಸ್ತಿಪಡಿಸುವ ಕಾರ್ಯ ಪ್ರಗತಿಯಲ್ಲಿರುತ್ತದೆ. |
| ಆ | ಪೋಡಿ ಕೆಲಸ ನಿರ್ವಹಿಸಲು ಮೂಲ ಮಂಜೂರಾತಿ ಕಡತಗಳು ಲಭ್ಯವಿರುವುದಿಲ್ಲ ವೆಂಬ ಕಾರಣ ನೀಡಿ ಅಧಿಕಾರಿ ಗಳು ಪೋಡಿ ಕೆಲಸವನ್ನು ನಿರ್ವಹಿಸದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಮೂಲ ಮಂಜೂರಾತಿ ಕಡತಗಳು ಲಭ್ಯವಿಲ್ಲದಿದ್ದಲ್ಲಿ ಪೋಡಿ ಕೆಲಸವನ್ನೇ ನಿರ್ವಹಿಸುವುದಿಲ್ಲವೇ ಅಥವಾ ಪೋಡಿ ಕೆಲಸ ನಿರ್ವಹಿಸಲು ಸರ್ಕಾರವು ಏನಾದರೂ ನಿರ್ಣಯ ಕೈಗೊಂಡಿದೆಯೇ; | ಬಂದಿದೆ.<br>ಮೂಲ ಮಂಜೂರಾತಿ ಕಡತಗಳು ಲಭ್ಯವಿಲ್ಲದಿದ್ದಲ್ಲಿ ಪೋಡಿ ಕೆಲಸವನ್ನು ನಿರ್ವಹಿಸುವ ಬಗ್ಗೆ ಈಗಾಗಲೇ ಸರ್ಕಾರವು ಪರ್ಯಾಯ ದಾಖಲೆಗಳ ಆದಾರವಾಗಿ ಕಡತ ನಿರ್ಮಾಣ ಮಾಡಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆ ಯಲ್ಲಿ ಜಿಲ್ಲಾ ಮಟ್ಟದ ಗೈರು ವಿಲೇ ಕಡತ ಸಮಿತಿಯನ್ನು ಸರ್ಕಾರದ ಸುತ್ತೋಲೆ ಸಂ, ಕಂಇ 74 ಎಲ್.ಜಿಪಿ 2009 ದಿನಾಂಕ 17-9-2009 ರನ್ವಯ ರಚಿಸಿದೆ. ನಂತರ ಈ ಮಿಸ್ಸಿಂಗ್ ಕಡತಗಳ ಸಮಿತಿಯ ಕಾರ್ಯ ನಿರ್ವಹಣೆಯ ಬಗ್ಗೆ ಅಗತ್ಯ ಸೂಚನೆಗಳನ್ನು ಸಹ ನೀಡಲಾಗಿದೆ. ಅದರಂತೆ ರಾಜ್ಯದಲ್ಲಿ ಮೂಲ ಮಂಜೂರಿ ಕಡತ ಲಭ್ಯವಿಲ್ಲದಂತಹ ಸಂಧರ್ಬದಲ್ಲಿ ಗೈರು ವಿಲೇ ಕಡತ ಸಮಿತಿಯಲ್ಲಿ ನಡವಳಿ ನಡೆದು ಅದರಂತೆ ಪೋಡಿ ಮಾಡುವ ಕಾರ್ಯ ಪ್ರಗತಿಯಲ್ಲಿರುತ್ತದೆ. |

| | | |
|---|---|---|
| ಇ | ರಾಮನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ವ್ಯಾಪ್ತಿಯಲ್ಲಿ ದರಖಾಸ್ತು ಪೋಡಿ ಆಂದೋಲನದ ನಂತರ ದುರಸ್ಥಿಯಾದ ಜಮೀನುಗಳೆಷ್ಟು; | ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ದರಖಾಸ್ತು ಪೋಡಿ ಆಂದೋಲನದಂತೆ ಒಟ್ಟು 701ಎಕರೆ-37.1/4ಗುಂಟೆ ಜಮೀನು ದುರಸ್ತಿ ಪಡಿಸಲಾಗಿರುತ್ತದೆ ಮತ್ತು ರಾಮನಗರ ಜಿಲ್ಲೆಯಲ್ಲಿ 461ಎಕರೆ-35ಗುಂಟೆ ಜಮೀನನ್ನು ದುರಸ್ತಿಪಡಿಸಲಾಗಿದೆ. |
| ಈ | ಏಕ ವ್ಯಕ್ತಿ ಪ್ರಕರಣದಡಿ ದರಖಾಸ್ತುಗೊಂಡ ಜಮೀನು ಗಳೆಷ್ಟು; ಇವುಗಳಲ್ಲಿ ಬಾಕಿ ಇರುವ ಪ್ರಕರಣಗಳೆಷ್ಟು; ಇದಕ್ಕೆ ಇರುವ ನಿಯಮಾವಳಿ ಗಳೇನು; ಇದರಿಂದ ಸಾರ್ವಜನಿಕರಿಗೆ ತೊಂದರೆ ಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? (ವಿವರ ನೀಡುವುದು) | ರಾಮನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಏಕವ್ಯಕ್ತಿ ಪ್ರಕರಣದಡಿ ದುರಸ್ತಿಗೊಂಡ ಜಮೀನುಗಳ ವಿವರ ಕೆಳಕಂಡಂತಿರುತ್ತದೆ. (see table below) ಮಂಜೂರಿ ಮಾಡಿರುವ ಜಮೀನನ್ನು ಏಕವ್ಯಕ್ತಿ ಕೋರಿಕೆ ಮೇರೆಗೆ ದುರಸ್ಥಿ ಮಾಡಲು ಸರ್ಕಾರ ಈಗಾಗಲೇ ಸೂಚನೆಗಳನ್ನು ನೀಡಲಾಗಿರುತ್ತದೆ. ಅದರಂತೆ ವಿಶೇಷ ಸಂಧರ್ಭಗಳಲ್ಲಿ ಮಾತ್ರ ಏಕ ವ್ಯಕ್ತಿ ಕೋರಿಕೆ ಪ್ರಕರಣದಡಿ ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 283 ಭೂದಾಸ 2010 ದಿನಾಂಕ:23-11-2010 ರಂತೆ ಸಂಬಂಧಿಸಿದ ಜಿಲ್ಲಾಧಿಕಾರಿಗಳ ಪೂರ್ವಾನುಮತಿ ಪಡೆಯಬೇಕಾಗಿತ್ತು. ಅದನ್ನು ಸರ್ಕಾರವು ಮಾರ್ಪಡಿಸಿ ಏಕವ್ಯಕ್ತಿ ಕೋರಿಕೆ ಮೇರೆಗೆ ತಹಶೀಲ್ದಾರರ ಪೂರ್ವಾನುಮತಿಯೊಂದಿಗೆ ದರಖಾಸ್ತು ಪೋಡಿ ದುರಸ್ತಿ ಮಾಡಲು ಅಗತ್ಯ ಸೂಚನೆಗಳನ್ನು ನೀಡಿದೆ. ಮತ್ತು ಅದರಂತೆ ಏಕವ್ಯಕ್ತಿ ಕೋರಿಕೆ ಮೇರೆಗೆ ದುರಸ್ಥಿ ಮಾಡುವ ಕಾರ್ಯ ಪ್ರಗತಿಯಲ್ಲಿರುತ್ತದೆ. |

| ಕ್ರಸಂ | ತಾಲ್ಲೂಕು | ದುರಸ್ತಿಯಾದ ಪ್ರಕರಣಗಳು | ಬಾಕಿ ಇರುವ ಪ್ರಕರಣಗಳು |
|---|---|---|---|
| 1 | ರಾಮನಗರ | 67 | 99 |
| 2 | ಬೆಂಗಳೂರು ಗ್ರಾಮಾಂತರ | 394 | 164 |
| | ಒಟ್ಟು | 461 | 263 |

**ಸಂಖ್ಯೆ: ಕಂಇ 67 ಎಸ್‌ಎಸ್‌ಸಿ 2020**

**(ಆರ್. ಅಶೋಕ)**
ಕಂದಾಯ ಸಚಿವರು